ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ಕಾರ್ಯಭಾರ ಕುರಿತು

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) :-

1426 (1771) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ ಹುದ್ದೆಗಳೆಷ್ಟು ; (ಜಿಲ್ಲಾವಾರು, ವಿಷಯವಾರು ಮಾಹಿತಿ ನೀಡುವುದು)

(ಆ) ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗಳನ್ನು ತುಂಬಲು ಸರ್ಕಾರ ನಿಗದಿಪಡಿಸಿರುವ ಕಾರ್ಯಭಾರ ಎಷ್ಟು ; ಕಾರ್ಯಭಾರಕ್ಕೆ ಸಂಬಂಧಪಟ್ಟ ಆದೇಶಗಳ ಪ್ರತಿ ಒದಗಿಸುವುದು ;

(ಇ) ಈ ಹಿಂದೆ ಪ್ರತಿ ವಿಷಯಕ್ಕೆ ಒಬ್ಬ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳುವ ಪರಿಪಾಠ ಇದ್ದುದ್ದನ್ನು ಬಿಟ್ಟು, ಅವೈಜ್ಞಾನಿಕವಾಗಿ ಕಾರ್ಯಭಾರ ನಿಗಧಿಪಡಿಸಿರುವುದರಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಇದನ್ನು ಪರಿಹರಿಸಲು ಕೈಗೊಂಡ ಕ್ರಮಗಳೇನು ;

(ಈ) ಕಾರ್ಯಭಾರ/ಮಕ್ಕಳ ಸಂಖ್ಯೆ ಕಡಿಮೆ ಇರುವ ಕಾಲೇಜುಗಳಿಗೆ ಹುದ್ದೆ ತುಂಬಲು ಅನುಮತಿ ನೀಡುವ ಸಂದರ್ಭದಲ್ಲಿ ಜಿಲ್ಲಾ ವ್ಯಾಪ್ತಿಯಲ್ಲಿನ ಕಾಲೇಜಿನ ಹುದ್ದೆಯನ್ನು ವಿಲೀನಗೊಳಿಸಿ ಎರಡೂ ಕಾಲೇಜುಗಳಿಗೆ ಒಬ್ಬರನ್ನು ನೇಮಿಸಲು ನಿರ್ಧರಿಸಿರುವುದು ನಿಜವೇ; ನಿಜವಿದ್ದಲ್ಲಿ, ಇದಕ್ಕೆ ಕಾರಣಗಳೇನು ; ಇದರಿಂದ ಮಕ್ಕಳಿಗೆ ಪೂರ್ವ ಪ್ರಮಾಣದ ಬೋಧಕರನ್ನು ನೀಡಿದಂತೆ ಆಗುವುದೇ ಪೂರ್ಣ ಪ್ರಮಾಣದ ಉಪನ್ಯಾಸರಿಲ್ಲದೇ ಆಗುತ್ತಿರುವ ತೊಂದರೆಗಳು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಬೋಧಕ ಹುದ್ದೆಗಳಿಗೆ 160-200 ವಿದ್ಯಾರ್ಥಿಗಳನ್ನು ನಿಗಧಿಪಡಿಸಿರುವುದರಿಂದ ಮಕ್ಕಳ ಗುಣಮಟ್ಟದ ಶಿಕ್ಷಣದಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಇದನ್ನು ಪರಿಹರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಊ) ಬೋಧಕರಿಗೆ ಪ್ರತಿ ತರಗತಿಗೆ ಇರುವ 80-100 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಕಡಿಮೆ ಮಾಡಿ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ದೊರಕಿಸಿಕೊಡುವಲ್ಲಿ ಸರ್ಕಾರ ಕೈಗೊಂಡ ಕ್ರಮವೇನು?